ಶ್ರೀ ವಿಜಯದಾಸಾರ್ಯ

ವಿರಚಿತ

# ಶ್ರೀ ರಾಮದೇವರ ಸುಳಾದಿ




ಸಂಪಾದಕ : ಅರವಿಂದಲೋಚನ

ಗತಶಾಲಿವಾಹನಶಕ ೧೯೪೨ ಚಾಂದ್ರಮಾನ

ಶಾರ್ವರೀ ನಾಮ ಸಂವತ್ಸರದ

ಹೇಮಂತಋತುವಿನ

ಮಾರ್ಗಶೀರ್ಷ ಮಾಸದ

ಕೃಷ್ಣ ಪಕ್ಷದ ಅಷ್ಟಮೀ ತಿಥಿಯಂದು ಈ ಗ್ರಂಥವು

ಪ್ರಕಟ

# ಶ್ರೀರಾಮದೇವರ ಸುಳಾದಿ

## ರಾಗ ಮಧ್ಯಮಾವತಿ

## ಧ್ರುವತಾಳ

ರಾಜ ರಾಜರಮಣಿ  ರಾಜಶೇಖರ ವಿನುತ

ರಾಜ ತೇಜೋನಿಧಿ ರಾಜಾಧೀಶ

ರಾಜಹಂಸ ನಯನ ರಾಜಶೇಖರ ವಿ -

ರಾಜಿತ ಕೀರ್ತಿ ಗಜರಾಜವರದ

ರಾಜವದನ ರಿಪುರಾಜ ಮಸ್ತಕಶೂಲ

ರಾಜರಾಜೋತ್ತುಮ ರಾಜವಿನುತ

ರಾಜೀವದೊಳಗಿದ್ದ ರಾಜೀವನ ಪುಟ್ಟಿಸಿದ

ರಾಜಮಾರ್ತಾಂಡ  ದ್ವಿಜರಾಜಗಮನ

ರಾಜ ರಾಜರು ನಿನ್ನ ರಾಜಿಸುವ ಚರಣ -
ರಾಜೀವದಲ್ಲಿ ವಾಲಗ ಮಾಳ್ಪರು
ರಾಜ ರಾಜಾಗ್ರಣ್ಯ ರಾಜಾಭಿಷೇಕಕ್ಕೆ
ರಾಜ ನೀನಲ್ಲದೆ ರಾಜರುಂಟೇ
ರಾಜಗಂಭೀರ ಅಪರಾಜಿತನಾಮ ನಮ್ಮ
ವಿಜಯವಿಠ್ಠಲ ರಂಗ -
ರಾಜ ಸಮುದ್ರರಾಜ ಶಯನನೆ ॥ **1** ॥

## ಮಟ್ಟತಾಳ

ದಶಶಿರನೆಂಬುವನು ಅಸಮ ವೀರನಾಗಿ
ಬಿಸನಿಧಿ ಮಧ್ಯದಲ್ಲಿ ತ್ರಿದಶರ ಶೆರೆಯಿಡಲು
ದಶದಿಕ್ಕಿನ ಒಳಗೆ ಪೆಸರಾಗಿ ಪಸರಿಸುತ

ಪಶುಪನ ವರದಿಂದ ಕುಸಿಯದಲಿರುತಿರೆ
ಅಸುರನ ಉಪಹತಿಗೆ ವಸುಧಿ ಭಾರವಾಗೆ
ಬಿಸಿಜಭವ ಸುಮನಸರೆಲ್ಲರು ಪೋಗಿ
ಬಿಸಿಜದಳನಯನ ವಸುಧಿ ಸಂರಕ್ಷಕನೆ
ಅಸುರರ ಶಿಕ್ಷಕನೆ ಆ ಸಮಯ ಬಂದಿದೆ
ದೆಶೆಗೆಟ್ಟವರ ಪಾಲಿಸಬೇಕೆಂದೆನುತ
ಶಿಶುಗಳೊದರಿದಂತೆ ಎಸದು ಮೊರೆಯಿಡಲು
ವೃಷಭನಾಮಕದೇವ ವಿಜಯವಿಠ್ಠಲರೇಯನ
ಬಿಸಜ ಚರಣದಲ್ಲಿ ಹಸನಾಗಿ ಬಿನ್ನೈಸೆ ॥ 2 ॥

# ರೂಪಕತಾಳ

ಮೂರು ಗುಣರಹಿತ ಮೂರುತಿ ಈತನ
ಕಾರುಣ್ಯವನ್ನು ಇನ್ನಾರು ಬಲ್ಲವರಿಲ್ಲ
ವಾರಿಜಾದ್ಯರ ಸಾರೆಗರದು ಶ -
ರೀರವ ತಡವರಿಸಿ ತಾರತಮ್ಯದಿಂದ
ಭಾರ ಎನ್ನದು ಎಂದು ಭರವಸವನಿತ್ತು
ಕ್ರೂರನಿಂದಲಿ ಬಂದ ಭಾರ ಇಳಿಸುವೆನೆಂದು
ಧಾರುಣಿಯೊಳಗಿತ್ತ ಈರೈದು ರಥದವನು
ನಾರಾಯಣನು ಕುಮಾರನಾಗಲೆಂದು
ಆರಾಧನೆಯ ಮಾಡೆ ಶ್ರೀರಾಮನೆಂದೆಂಬವ -
ತಾರವನ್ನು ಧರಿಸಿದ ರಮಾರಮಣನೂ
ಚಾರುಗುಣ ನಿಲಯ ವಿಜಯವಿಠ್ಠಲರೇಯ
ಸಾರಿದವರ ಮನೋಹರವ ತೋರುತ್ತ ॥ 3 ॥

# ಝಂಪೆತಾಳ

ಮುನಿಪ ಕೌಶಿಕನ ಯಾಗವ ಕಾಯಿದು ತಾಟಕಿ

ದನುಜಿಯ ಮುರಿದು ನಿಜಾನನುಜನ ಕೂಡ

ಜನಕ ಪುರಕೆ ಗಮನವಾಗಿ ಪೋಗುತ್ತ

ಮುನಿಯಾಂಗನಿಯ ಶಾಪವನ್ನ ತೊಡದೂ

ಅನಲಾಕ್ಷನ ಧನಸ್ಸು ಮುರಿದು ನಿಕ್ಕಡಿ ಮಾಡಿ

ಜನಕರಾಯನ ನಂದನಿಯ ನೆರದು

ಅನುವರದೊಳಗೆ ಭೃಗು ತನುಜನ್ನ ಪೊಕ್ಕಳಲಿ

ದನುಜ ಸೇರಿರಲು ಬಾಣದಲಿ ಸದೆದೂ

ತನಗೆ ತಾನೇ ಲೀಲೆ ತೋರಿದ ಮಹದ್ದೈವ

ವಾತನೆ ಕಾಣೊ ಗೋಹಿತ ವಿಜಯವಿಠ್ಠಲ ರಾಮ ॥4॥

# ತ್ರಿವಿಡ ತಾಳ

ಪಿತನ ಮಾತನು ಮನ್ನಿಸಿ ಸತಿಸಹಿತ ಭಾಗೀ -
ರಥಿಯ ದಾಟುತಲಿ ಭಕುತಗೊಲಿದು
ಅತಿಶಯವಾದ ಪರ್ವತ ಚಿತ್ರಕೂಟದಲಿ
ಯತಿಗಳಿಂದಲಿ ಪೂಜಿತನಾಗುತ
ಮತಿಹೀನನಾಗಿ ಬಾಳುತಲಿದ್ದ ಕಾಕನ್ನ
ಗತ ಲೋಚನನ ಮಾಡಿ ಕ್ಷಿತಿಗಟ್ಟಿದೆ
ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು
ವೃತವ ಧರಿಸಿದ ಉನ್ನತ ಮಹಿಮಾ
ಪಥಚಾರನಾಗಿ ಶೋಭಿಸುತ ದಂಡಕಾರಣ್ಯ
ಯತಿಪುಂಗವ ಕುಂಭಸುತನ ಕಂಡು
ಪ್ರತಿರಥನಾಮಾ ವಿಜಯವಿಠ್ಠಲ ರಘು -
ಪತಿ ನೀನೆ ಉತ್ಪತ್ತಿ ಸ್ಥಿತಿ ಲಯ ಕರ್ತನೇ ‖ 5 ‖

# ಅಟ್ಟತಾಳ

ಮೋಸದ ಅಸುರಿಯ ಮೂಗು ಕೊಯ್ದು ಖರ -
ದೂಷಣಾದ್ಯರನ್ನ ಕೊಂದು ಗೌತುಮೆಯಲ್ಲಿ
ವಾಸವಾಗಿದ್ದ ಮಾರೀಚ ಮಾಯಾಮೃಗ
ವೇಷವಾಗಿ ಬರೆ ಕೊಂದು ಮಾರ್ಗದಲ್ಲಿ
ಘಾಸಿಯಾಗಿದ್ದ ವಿಹಂಗನ್ನ ಮನ್ನಿಸಿ
ದ್ವೇಷಿ ಕಬಂಧನ ಕಡಿದು ಶಬರಿಯ
ಮೀಸಲ ಭಕುತಿಗೆ ಹಣ್ಣುಸವಿದು ಸಂ -
ತೋಷದಿಂದಲಿ ತುಂಗಾತೀರದಲ್ಲಿ ಪವ -
ನಾ ಸೂನು ಎರಗಲು ಎತ್ತಿ ಮಾತಾಡಿ ದಿ -
ನೇಶ ತನುಜಗೆ ಅಭಯವನು ಇತ್ತು

ಬೀಸಿ ವಗೆದೆ ಕಾಲಲಿ ದುಂಧುಮಾರನ್ನ
ನೀ ಸವರಿದೆ ಏಳು ತಾಳವ ಒಮ್ಮೆಲೆ
ಸಾಸಿರನಾಮನೆ ವಿಜಯವಿಠ್ಠಲ ನರ -
ವೇಷವ ಧರಿಸಿದ ವೈಕುಂಠವಾಸ ॥ 6 ‖

## ಆದಿತಾಳ

ಭೀತಿ ಶೂನ್ಯನಾದ ಪುರಹೂತ ಮಗನ ಕೊಂದು ರವಿ
ಜಾತಗೆ ಪಟ್ಟವಗಟ್ಟಿ ಪ್ರೀತಿದೂತ ವಾಯುಜನ
ಆ ಸೀತೆ ಬಳಿಗೆ ಕಳುಹೆ ಪೋಗಿ
ಮಾತು ತಂದ ಪೇಳಿದಾತಗೆ ವರವನ್ನಿತ್ತು
ಕೋತಿ ಕರಡಿ ಸಹಿತವಾಗಿ ಸೇತುವೆ ಬಿಗಿಸಿ ಬಂದ
ನೀತ ವಿಭೀಷಣನ ಕೂಡ ಕಾತುರದಿಂದಲಿ ದಾಟಿ

ಧೂರ್ತ ರಾವಣಾದಿಗಳ ಯಾತನಿಗೆ ಬೀಳ್ಕೊಡಿಸಿ
ಪ್ರೀತಿಯಾಸ್ಪದನಾದ ತಾತ ವಿಭೀಷಣಗೆ ಪ್ರ -
ದ್ಯೋತ ಶಶಿ ಉಳ್ಳನಕ ಭೂತಳದೊಳಗೆ ಲಂಕೆ -
ಯ ತಪ್ಪದಂತೆ ಆಳೆಂದಾತಗೆ ಪಟ್ಟವಗಟ್ಟಿ
ಸೀತೆ ಸಹಿತ ಬಂದು ಸಾಕೇತಪುರದಲ್ಲಿ ನಿಂದು
ಧಾತಾದಿಗಳ ಮನಕೆ ಪ್ರೀತಿ ಬಡಿಸಿ ಶೆರೆಯ ಬಿಡಿಸಿ
ಸೀತೆಯರಸ ವಿಜಯವಿಠ್ಠಲ ಭೂತ -
ನಾಥನಿಂದ ಬಂದ ಮಾತು ಮನ್ನಿಸಿದ ಮಹಾತ್ಮಾ

॥7॥

## ಜತೆ

ಸಾರ್ವಭೌಮನೆ ರಾಮಾ ದುರುಳ ದೈತ್ಯ ವಿರಾಮ

ಸರ್ವಯೋಗಿ ವಿನಿಶ್ರುತಾ ವಿಜಯವಿಠ್ಠಲ ॥

## ||ಶ್ರೀ ಕೃಷ್ಣಾರ್ಪಣಮಸ್ತು||

## ||ಶ್ರೀ ಮಧ್ವೇಶಾರ್ಪಣಮಸ್ತು||